ಎಚ್. ಎಸ್. ಗೋಪಾಲರಾವ್

# ಕೈದಾಳದ ಹುಲಿಬೇಟೆಯ ವೀರಗಲ್ಲು ಶಾಸನ

ತುಮಕೂರು ತಾಲ್ಲೂಕಿನ ಗೂಳೂರು ಹೋಬಳಿಯ ಕೈದಾಳದ ಊರ ಹಿಂಭಾಗದಲ್ಲಿ, ಕೆಂಪಯ್ಯನ ಪಾಳ್ಯಕ್ಕೆ ಹೋಗುವ ಕಾಲುಹಾದಿಯ ಪಕ್ಕ ಒಂದು ವೀರಗಲ್ಲನ್ನು ನಿಲ್ಲಿಸಲಾಗಿದೆ. ಹುಲಿಯನ್ನು ಇರಿದು ಕೊಲ್ಲುತ್ತಿರುವ ವೀರನ ಚಿತ್ರವಿರುವ, ಕಪ್ಪು ಕಣಶಿಲೆಯ ಈ ಶಾಸನ ಸಹಿತ ವೀರಗಲ್ಲಿನ ಎತ್ತರ ಸುಮಾರು ನಾಲ್ಕೂವರೆ ಅಡಿ ಮತ್ತು ಅಗಲ ಮೂರೂವರೆ ಅಡಿ. ವೀರಗಲ್ಲಿನ ಮಧ್ಯಭಾಗದಲ್ಲಿ ಹುಲಿಯನ್ನು ಕೊಲ್ಲುತ್ತಿರುವ ವೀರನ ಚಿತ್ರವಿದೆ. ಚಿತ್ರದ ಮೇಲೆ ನಾಲ್ಕುಸಾಲು, ಬಲಬದಿಗೆ ಆರುಸಾಲು ಮತ್ತು ಎಡ ಬದಿಗೆ ಎರಡುಸಾಲು ಶಾಸನವನ್ನು ಬರೆಯಲಾಗಿದೆ.

### ಶಾಸನದ ಪಾಠ

೧. ಸ್ವಸ್ತಿಶ್ರೀ ಪಿಂಗಳ ಸಂವತ್ಸರದ ಶ್ರಾವಣ ಸು
೨. ದ್ಧ ಸಪ್ತಮಿ ಸೋಮವಾರದಂದು (ಸಾ)ವನ್ತ
೩. ಗೂಳಿಬಾಚಿಯ ಬಂಟ ಚಂದ ಹರಿಯು
೪. ದಿನ ಮಾರ ಪಲಬರು (ಸು)ಡಲು ಹು
೫. ಲಿಯನಿಱಿದು ಸತ್ತ
೬. ಡವರಣ್ಣ (ಅ)ದಳ ಹ
೭. ರಿ(ಲ)(ಟ)ಪ
೮. (ಕಾ)ರ್ರಬೆಸ
೯. (ಲ)ಕಾ ಮಾ
೧೦. ಡಿದ

ಕ್ರಿಸ್ತಶಕ ೧೨ನೆಯ ಶತಮಾನದ ಅತಿಸ್ವರೂಪದ ಈ ಶಾಸನವು ಹುಲಿಯನ್ನು ಇರಿದುಕೊಂಡ ಚಂದನಿಗಾಗಿ ಅವರ ಅಣ್ಣ ಹಾಕಿಸಿದ್ದಾಗಿದೆ. ಚಂದನು ಗೂಳಿ ಬಾಚಿಯ ಬಂಟ. ಗೂಳಿಬಾಚಿಯು ಹೊಯ್ಸಳ ಒಂದನೆಯ ನರಸಿಂಹನ ಸಾಮಂತನಾಗಿ ಮರುಗೆರೆ ನಾಡನ್ನಾಳುತ್ತಿದ್ದವನು.[1] ಗಂಗರ ಕಾಲದ ಹಿರೀಗುಂಡ ಗಲ್ಲಿನ ಕೆಲವು ಶಾಸನಗಳಲ್ಲೂ ಉಕ್ತವಾಗಿರುವ ಮರುಗೆರೆ ನಾಡು[2] ಈಗಿನ ಮರಳೂರಿನ ವ್ಯಾಪ್ತಿಗೆ ಸೇರಿದ್ದ ಪ್ರದೇಶವಾಗಿರಬಹುದು.

ಶಾಸನದ ಪ್ರಕಾರ, ಸಾಮಂತ ಗೂಳಿಬಾಚಿಯ ಸೇವಕ ಚಂದನು ಹರಿಯು, ದಿನ(!), ಮಾರ ಮುಂತಾದವರು ನೋಡುತ್ತಿರಲು ಹುಲಿಯನ್ನು ಇರಿದು ಸತ್ತಾಗ ಅವರ ಅಣ್ಣ ವೀರಗಲ್ಲನ್ನು ಹಾಕಿಸುತ್ತಾನೆ. ವೀರಗಲ್ಲನ್ನು ಮಾಡಿದವನು 'ಲಕ್ಕ' ಎಂಬುವವನಿರಬೇಕು. ಶಾಸನದ ಕಲ್ಲಿನಲ್ಲಿ ಚಕ್ಕೆ ಎದ್ದಿರುವುದರಿಂದ ಕೆಲವು ಅಕ್ಷರಗಳು ಅಸ್ಪಷ್ಟವಾಗಿವೆ.

ಹುಲಿಯನ್ನು ಬೇಟೆಯಾಡಲು, ಅದು ಊರಿನ ಜನ-ಜಾನುವಾರುಗಳಿಗೆ ತೊಂದರೆ ಮಾಡುವುದು ಎಂಬ ಕಾರಣವೇ ಪ್ರಮುಖವಾದುದು. ದುಷ್ಟಪ್ರಾಣಿಯಿಂದ ತಮ್ಮನ್ನೂ ತಮ್ಮ ಜಾನುವಾರುಗಳನ್ನೂ ರಕ್ಷಿಸಿದವನನ್ನು ಜನತೆ 'ವೀರ' ಎಂದು ಪರಿಗಣಿಸಿ ಗೌರವಿಸುತ್ತಿತ್ತು. ವೀರರಿಗೆ ಸಂದ ಗೌರವದ ಸ್ಮಾರಕವೇ ವೀರಗಲ್ಲುಗಳು.

1. ಎ. ಕ., ಸಂಪುಟ ೧೨, ತುಮಕೂರು ೯, ಕ್ರಿ. ಶ. ೧೧೫೦
2. ಅದೇ, ತುಮಕೂರು ೯೮, ಕ್ರಿ.ಶ.ಸು. ೭೭೫

ಹುಲಿಯ ಬೇಟೆಯಲ್ಲಿ ವೀರ ಸತ್ತಿರಬಹುದು ಅಥವಾ ಸಾಯದೆ ಗೆದ್ದು ಬಂದಿರಬಹುದು. ಹುಲಿಯ ಬೇಟೆಯಲ್ಲಿ ಸತ್ತ ನಾಯಿಗಳಿಗೂ ವೀರಗಲ್ಲನ್ನು ಹಾಕಿಸಿರುವ ನಿದರ್ಶನಗಳಿವೆ.

ಚಂದ ಹುಲಿಯನ್ನು ಇರಿದುದನ್ನು ಹಲವರು ನೋಡಿದ್ದಾರೆ. ಹುಲಿಯನ್ನು ಇರಿದು ಚಂದ ಸತ್ತದ್ದಕ್ಕಾಗಿ ಈ ವೀರಗಲ್ಲನ್ನು ಹಾಕಲಾಗಿದೆ.

'ವೀರ'ಚಂದನು ಗೂಳಿಬಾಚಿಯ ಭಂಟನಾಗಿದ್ದವನು. ಗೂಳಿಬಾಚಿಯ ಕಾಲ ಕ್ರಿ. ಶ. ೧೧೫೧ರ ಸುಮಾರು ಎಂದು ಕೈದಾಳದ ಒಂದು ಶಾಸನದಿಂದ ತಿಳಿದಿದೆ. ಕೈದಾಳದಲ್ಲಿರುವ ಚಂನಕೇಶವ, ಪ್ರಸನ್ನ ಗಂಗಾಧರೇಶ್ವರ, ರಾಮೇಶ್ವರ, ಕಿತ್ತಗಳಿಯ ಚಲವರಿವೇಶ್ವರ, ಭೀಮಸಂದ್ರದ ಭೀಮಜಿನಾಲಯ ಇಷ್ಟನ್ನು ತಂದೆ, ಮಗಳು, ಮುತ್ತಜ್ಜ ಮತ್ತು ಹೆಂಡತಿಯರ ಪರೋಕ್ಷವಿನಯವಾಗಿ ಗೂಳಿಬಾಚಿದೇವನು ನಿರ್ಮಿಸಿದ್ದಾನೆ.[3] ದಂತಕಥೆಗಳ ಪ್ರಕಾರ ಕೇಶವ ದೇವಾಲಯವನ್ನು ನಿರ್ಮಿಸಿದವನು ಜಕಣಾಚಾರಿ. ಇದಕ್ಕೆ ಶಾಸನಾಧಾರಗಳಿಲ್ಲ. ಆ ದೇವಾಲಯದ ನಿರ್ಮಾತೃ ಗೂಳಿಬಾಚಿದೇವ ಎಂಬುದು ಇತಿಹಾಸ ತಿಳಿಸುವ ಸಂಗತಿ.

ಗೂಳಿಬಾಚಿದೇವನ ಉಲ್ಲೇಖವಿರುವ ಈಗಾಗಲೇ ಉಲ್ಲೇಖಿಸಿದ ಶಾಸನದ ಕಾಲ ಕ್ರಿ.ಶ. ೧೧೫೧ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಶಾಸನದಲ್ಲಿ ಉಕ್ತವಾಗಿರುವ ಕಾಲ ೧೦೭೨ನೆಯ ಪ್ರಮಾಥಿ ಸಂವತ್ಸರ· ಅಂದರೆ ಕ್ರಿ.ಶ. ೧೧೫೦–೧೧೫೧ಕ್ಕೆ ಸರಿಯಾಗುತ್ತದೆ. ಆದರೆ ಶಾ.ಶ. ೧೧೭೨ ಪ್ರಮೋದೂತ ಸಂವತ್ಸರವಾಗಿತ್ತು. ಪ್ರಮೋದೂತದ ಬದಲಿಗೆ ಪ್ರಮಾಥಿ ಎಂದು ಉಲ್ಲೇಖವಾಗಿದೆ ಎಂದು. ಅದು ಪ್ರಮಾಥಿಯೇ ಎಂದು ಸ್ವೀಕರಿಸುವುದಾದರೆ ಅದರ ಕಾಲವು ಕ್ರಿ.ಶ. ೧೧೩೪ ಅಥವಾ ೧೧೯೪ ಆಗುತ್ತದೆ–ಎರಡೂ ಕಾಲದಲ್ಲಿ ಒಂದನೆಯ ನರಸಿಂಹನು ರಾಜ್ಯಭಾರ ಮಾಡುತ್ತಿರಲಿಲ್ಲ· ಆದ್ದರಿಂದ ಪ್ರಮೋದೂತ ಸಂವತ್ಸರವೇ ಸರಿಯಾದ ಕಾಲ. ಅದೇ ಕಾಲದ ನೆರವಿನಿಂದ ಪ್ರಸ್ತುತ ಶಾಸನದಲ್ಲಿ ಉಕ್ತವಾಗಿರುವ ತಿಂಗಳ ಸಂವತ್ಸರವು ಕ್ರಿ.ಶ. ೧೧೩೮ರ (ಶಾ.ಶ. ೧೦೫೯) ಎಂದು ನಿರ್ಣಯಿಸಬಹುದಾಗಿದೆ.

ಗೂಳಿಬಾಚಿದೇವನು ಕ್ರಿ.ಶ. ೧೧೫೧ರಲ್ಲಿ ಕೈದಾಳ, ಕಿತ್ತಗಳಿ, ಭೀಮಸಂದ್ರಗಳಲ್ಲಿ ದೇವಾಲಯಗಳನ್ನು ಕಟ್ಟಿಸುವುದಕ್ಕೆ ಹದಿಮೂರು ವರ್ಷಗಳಿಗೆ ಮೊದಲೇ ಅಂದರೆ ಕ್ರಿ.ಶ. ೧೧೩೮ರಲ್ಲಿ, ಪ್ರಸ್ತುತ ವೀರಗಲ್ಲಿನ ಶಾಸನವನ್ನು ಹಾಕಿಸಲಾಗಿದೆ. ಗೂಳಿಬಾಚಿಯ ಮೊದಲ ಉಲ್ಲೇಖವಿರುವ ಶಾಸನವೇ ಈಗ ಪ್ರಕಟವಾಗುತ್ತಿರುವ ವೀರಗಲ್ಲು ಶಾಸನ ಎಂದು ತಿಳಿಯಬಹುದಾಗಿದೆ.

ಗೂಳಿಬಾಚಿಯು ಅದಳವಂಶಕ್ಕೆ ಸೇರಿದವನು ಎಂದು ಕೈದಾಳದ ಶಾಸನ ದಾಖಲಿಸಿದೆ. 'ಅದಳರಾದಿತ್ಯಂ', 'ಅದಳಕುಳಹಂಸ', 'ಅದಳಕುಳಾನ್ವಯ' ಎಂದೆಲ್ಲಾ ಗೂಳಿಬಾಚಿಯನ್ನು ಪ್ರಶಂಸಿಸಲಾಗಿದೆ.

ಶಿವಗಂಗೆಯ ಒಂದು ಶಾಸನವು ವಿಷ್ಣುವರ್ಧನನನ್ನು 'ಅದಳಕುಳರತ್ನಭೂಷಣನದಳಕುಳಾಂಭೋಜಭಾನು' ಎಂದು ಪ್ರಶಂಸಿಸಿ ಅವನು ಪ್ರತಿಷ್ಠಿಸಿದ ಈಶ್ವರನಿಗೆ ಅದಳೇಶ್ವರ ಎಂದು ಉಲ್ಲೇಖಿಸಿದೆ.[4] ಶಾಸನವು ಬಿಟ್ಟಿದೇವ ಎಂದೇ ವಿಷ್ಣುವರ್ಧನನನ್ನು ಸಂಬೋಧಿಸಿದೆ. ಇದರಿಂದ ಹೊಯ್ಸಳವಂಶವನ್ನೇ ಅದಳವಂಶವೆಂದೂ ಕರೆಯಲಾಗಿದ್ದಂತೆ ತೋರುತ್ತದೆ. ಕೊತ್ತಗೆರೆಯ ಒಂದು ಶಾಸನವು ವಿಷ್ಣುವರ್ಧನನನ್ನು ಯಾದವಸಿಂಹನೆಂದು ಉಲ್ಲೇಖಿಸಿದೆ. ದೊಡ್ಡಬಿದಿರೆಯ ಒಂದು ಶಾಸನವು ಅದೇ ವಿಷ್ಣುವರ್ಧನನನ್ನು ಆದವಕುಳತಿಳಕನೆಂದು ಹೊಗಳಿದೆ. ಈ ಹಿನ್ನೆಲೆಯಲ್ಲಿ ಯಾದವ> ಆದವ>ಅದಳ ವಂಶಗಳೆಲ್ಲಾ ಒಂದೇ—ಅದು ಹೊಯ್ಸಳರ ಮೂಲವಂಶವನ್ನು ಸೂಚಿಸುತ್ತದೆ ಎಂದು ತಿಳಿಯಬಹುದು—ಅದನ್ನು ಒಪ್ಪಿದರೆ ಗೂಳಿಬಾಚಿಯು ಅದಳವಂಶಕ್ಕೆ ಅಂದರೆ ಹೊಯ್ಸಳವಂಶಕ್ಕೆ ಸೇರಿದವನು ಎಂದು ತೀರ್ಮಾನಿಸಬೇಕಾಗುತ್ತದೆ.

ಅದಳವು ಅದಟದ ರೂಪ ಎಂದು ಸ್ವೀಕರಿಸುವುದಾದರೆ ಅದು 'ವೀರ'ತನದ ಅಥವಾ ಕಲಿತನವನ್ನು ಸೂಚಿಸುತ್ತದೆ.

3. ಅದೇ, ತುಮಕೂರು ೯, ಕ್ರಿ.ಶ. ೧೧೫೧
4. ಅದೇ, ಸಂಪುಟ ೯, ನೆಲಮಂಗಲ ೮೪, ಕ್ರಿ.ಶ. ೧೧೫೩

ಅದಟಕ್ಕೆ ವೀರ ಎಂಬ ಅರ್ಥವೇ ಇದೆ. ಆದ್ದರಿಂದ ಆದಳವಂಶವು ವೀರದವಂಶ ಎಂದಷ್ಟೇ ತಿಳಿಯಬೇಕಾಗುತ್ತದೆ. ಆದ್ದರಿಂದ ಅದಳವಂಶವು ಹೊಯ್ಸಳ ವಂಶವನ್ನೇ ಪ್ರತಿನಿಧಿಸುತ್ತದೆ ಎಂದು ತಿಳಿಯಬಹುದಾಗಿದೆ.

ಹುಲಿಯ ಬೇಟೆಯ ವೀರಗಲ್ಲುಗಳ ಸಂಖ್ಯೆ ಕಡಿಮೆ ಎಂದೇ ಹೇಳಬಹುದು. ಕೋಲಾರ, ಚಿತ್ರದುರ್ಗ, ಚಿಕ್ಕಮಗಳೂರು, ಬೆಂಗಳೂರು ಜಿಲ್ಲೆಗಳಲ್ಲಿ ಹಲವು ಹುಲಿಯ ಬೇಟೆಯ ವೀರಗಲ್ಲುಗಳನ್ನು ಡಾ॥ ಆರ್. ಶೇಷಶಾಸ್ತ್ರಿ ಅವರು ಗುರುತಿಸಿದ್ದಾರೆ.[5]

ಕಾಡು ಹೆಚ್ಚಾಗಿದ್ದ ಕಡೆ ಹುಲಿಗಳು ಇರುವುದು ಸ್ವಾಭಾವಿಕ. ಈಗ ದಟ್ಟವಾಗಿ ಕಾಡಿಲ್ಲದ ತುಮಕೂರು ತಾಲ್ಲೂಕಿನಲ್ಲಿ ಆಗ ದಟ್ಟವಾದ ಕಾಡುಗಳಿದ್ದುವು ಎಂದು ಊಹಿಸಬಹುದಾಗಿದೆ.

ಕೈದಾಳದಲ್ಲೇ ಇನ್ನೂ ಮೂರು ವೀರಗಲ್ಲುಗಳಿವೆ. ಇವುಗಳಲ್ಲಿ ಪ್ರಸನ್ನ ಗಂಗಾಧರೇಶ್ವರ ದೇವಸ್ಥಾನದ ಬಳಿ ಇರುವ ಒಂದು ಮತ್ತು ರಾಮೇಶ್ವರ ದೇವಸ್ಥಾನದ ಬಳಿ ಇರುವ ಒಂದು ವೀರಗಲ್ಲಿನಲ್ಲಿ ವೀರನು ಬಿಲ್ಲನ್ನು ಹಿಡಿದು ಹೋರಾಡುತ್ತಿದ್ದಾನೆ—ಇವೆರಡರಲ್ಲೂ ವೀರನ ಹಿಂದೆ ಸ್ತ್ರೀ ನಿಂತಿದ್ದಾಳೆ. ಆದ್ದರಿಂದ ಇವೆರಡೂ ಪೆಣ್ಬುಯ್ಯಲ್‌ನ ಶಾಸನಗಳಾಗಿರಬಹುದು. ಶಾಸನಗಳ ಪಾಠವು ಸ್ಪಷ್ಟವಾಗಿಲ್ಲ. ರಾಮೇಶ್ವರ ದೇವಾಲಯದ ಬಳಿ ಇರುವ ಒಂದು ವೀರಗಲ್ಲಿನಲ್ಲಿ ಯೋಧನೊಬ್ಬನಿದ್ದಾನೆ ; ಶಾಸನವಿಲ್ಲ. ಶಾಸನವಿರುವ ಎರಡೂ ವೀರಗಲ್ಲುಗಳ ಕಾಲ ಕ್ರಿ.ಶ. ಸು. ೧೧೫೦ ಎನ್ನಬಹುದು.

---

5. ಕರ್ನಾಟಕದ ವೀರಗಲ್ಲುಗಳು, ಬೆಂಗಳೂರು, ೧೯೮೨, ಪು. ೧೩೪-೧೩೭